# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1021 |
| ಸದಸ್ಯರ ಹೆಸರು | ಶ್ರೀ ಕೆ.ಹರೀಶ್ ಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 22.12.2021 |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ ವಿವರ | ಉತ್ತರ |
|---|---|---|
| | ಉಡುಪಿ ಜಿಲ್ಲೆಯ ಕುಂದಾಪುರ ನಗರಸಭೆ ವ್ಯಾಪ್ತಿಗೆ ಸಂಬಂಧಿಸಿದಂತೆ ಸರ್ವೆ ನಂ.133/2 P1 ಪೋಡಿ/ಖಾತಾ ಬದಲಾವಣೆಗೆ/ ಹಕ್ಕು ಬದಲಾವಣೆಗೆ ಸಂಬಂಧಿಸಿದಂತೆ ಇದುವರೆಗೆ ಸಲ್ಲಿಕೆಯಾಗಿರುವ ದಾಖಲಾತಿಗಳು ಮತ್ತು ಆದೇಶವು ಸೇರಿದಂತೆ ಸಂಪೂರ್ಣ ನಡವಳಿಯ ಪ್ರತಿಯನ್ನು ನೀಡುವುದು; | ಕುಂದಾಪುರ ತಾಲೂಕು, ವಡೇರಹೋಬಳಿ ಗ್ರಾಮದ ಸರ್ವೇ ನಂ: 133/2 ರಲ್ಲಿ 0.26 ಎಕರೆ ಜಮೀನಿಗೆ ಸಂಬಂಧಿಸಿದಂತೆ ಶ್ರೀ ವಿ.ಸುರೇಂದ್ರ ಶೆಟ್ಟಿ ಇವರು ಉಪ ವಿಭಾಗಾಧಿಕಾರಿ, ಕುಂದಾಪುರ ಇವರ ನ್ಯಾಯಾಲಯದಲ್ಲಿ ಆರ್ಎ.1109/2017 ನ್ನು ದಾಖಲಿಸಿರುತ್ತಾರೆ. ದಿನಾಂಕ: 13-11-2017 ರ ಆದೇಶದಲ್ಲಿ ಮೇಲ್ಮನವಿಯನ್ನು ಪುರಸ್ಕರಿಸಿ, ನೋಂದಾಯಿತ ದಸ್ತಾವೇಜು ನಂಬರ್ 133/1969-70 ಮತ್ತು 1020/1972-73ರ ಪ್ರತಿಗಳನ್ನು ಹಾಜರುಪಡಿಸಿಕೊಂಡು ಅವುಗಳನ್ನು ಪರಿಶೀಲಿಸಿ, ವಿಚಾರಣಾಧೀನ ಜಮೀನಿನ ಬಗ್ಗೆ ಭೂನ್ಯಾಯ ಮಂಡಳಿಯಲ್ಲಿ ನಮೂನೆ 7 ಮತ್ತು 7ಎ ಅರ್ಜಿಗಳು ತನಿಖೆಗೆ ಬಾಕಿ ಇರುವ ಬಗ್ಗೆ ಪರಿಶೀಲಿಸಿ, ಬಾಕಿ ಇಲ್ಲದಿದ್ದಲ್ಲಿ ಮೇಲಿನ ದಸ್ತಾವೇಜುಗಳನ್ನು ಪರಿಶೀಲಿಸಿ, ವಿಚಾರಣಾಧೀನ ಜಮೀನಿನ ಪಹಣಿ ಕಾಲಂ 11 ರಲ್ಲಿ ಇರುವ ದಾಖಲೆಯನ್ನು ಲೋಪ ಸರಿಪಡಿಸಲು ತಹಶೀಲ್ದಾರರು ಕುಂದಾಪುರ ಇವರಿಗೆ ನಿರ್ದೇಶನ ನೀಡಲಾಗಿರುತ್ತದೆ.<br>ಅದರಂತೆ, ಕುಂದಾಪುರ ತಹಶೀಲ್ದಾರರು ವಾದಿ/ ಪ್ರತಿವಾದಿಯವರಿಗೆ ನೋಟೀಸು ನೀಡಿ ವಿಚಾರಣೆ ನಡೆಸಿ, ವಡೇರ ಹೋಬಳಿ ಗ್ರಾಮದ ಸ.ನಂ. 133/2 ರಲ್ಲಿ 0.26 ಎಕರೆ ಜಮೀನು ಎಂದಿರುವುದನ್ನು ಸ.ನಂ 133/2 0.13 ಎಕರೆ ಮತ್ತು ಸ.ನಂ. 133/24 ರಲ್ಲಿ 0.13 ಎಕರೆ ಎಂದು ಹಿಸ್ಸಾ ಬದಲಾವಣೆಯಾಗಿದ್ದು, ಸದರಿ ಜಮೀನಿನ ಪಹಣಿ ಕಾಲಂ 11 ರಲ್ಲಿರುವ ನೀಲಮ್ಮ ಶೆಟ್ಟಿ ಬಿನ್ ಮಹಾಬಲ ಶೆಟ್ಟಿ ಇವರು ರಾಧಮ್ಮ ಶೆಟ್ಟಿ, ಜಲಜ, ಶಿವಮ್ಮ ಶೆಟ್ಟಿ ಈ ಮೂವರು ನೀಲಮ್ಮ ಶೆಟ್ಟಿ ಬರೆದುಕೊಟ್ಟ ಗೇಣಿ ಕೊಡಬೇಕು ಎಂದು ದಾಖಲಾಗಿದ್ದು, ಸದರಿ ದಾಖಲೆಯಲ್ಲಿನ ಲೋಪ ಸರಿಪಡಿಸಲು ಆರ್ಆರ್ಟಿ/ಸಿಆರ್/38/2017-18 ದಿನಾಂಕ: 28-07-2018 ರಂತೆ ತಹಶೀಲ್ದಾರರು ಆದೇಶ ಹೊರಡಿಸಿರುತ್ತಾರೆ. ತದನಂತರ, ಮೇಲ್ಕಾಣಿಸಿದ |

| | | |
|---|---|---|
| | | ಕುಂದಾಪುರ ತಾಲೂಕು, ವಡೇರ ಹೋಬಳಿ ಗ್ರಾಮದ ಸ.ನಂ 133/2 ರಲ್ಲಿ 0.13 ಎಕರೆ ಜಮೀನು ನೋಂದಾಯಿತ ಕ್ರಯ ದಸ್ತಾವೇಜು 4436/2020-21 ದಿನಾಂಕ: 06-02-2021 ರಂತೆ ಶ್ರೀಮತಿ ಸುಫಲಾ ಇವರಿಗೆ ಕ್ರಯಕ್ಕೆ ನೀಡಿದ್ದು, ಎಂಆರ್‌ಹೆಚ್ 87/2020-21 ರಂತೆ ಮ್ಯುಟೇಷನ್ ಆದೇಶವಾಗಿರುತ್ತದೆ.<br>ವಡೇರ ಹೋಬಳಿ ಗ್ರಾಮದ ಸರ್ವೆ ನಂಬರ್ : 133/2ಪಿ1 ರಲ್ಲಿ ಸ್ವೀಕೃತಿಯಾದ ಅರ್ಜಿ ಸಂಖ್ಯೆ : 16011016252575 ರಂತೆ ಸರ್ವೆ ನಂಬರ್ : 133/2 ರಲ್ಲಿ ಹಿಸ್ಸಾ 2 ಮತ್ತು 24 ಎಂದು ಪೋಡಿ ದುರಸ್ಥಿಯಾಗಿ ರುತ್ತದೆ. ಸಂಬಂಧಿಸಿದ ಆದೇಶ/ನಡವಳಿಯ ಪ್ರತಿಗಳನ್ನು ಅನುಬಂಧದಲ್ಲಿರಿಸಿದೆ. |

ಸಂಖ್ಯೆ: ಕಂಇ 227 ಎಸ್‌ಎಸ್‌ಸಿ 2021

(ಆರ್.ಅಶೋಕ)
ಕಂದಾಯ ಸಚಿವರು